# ಕರ್ನಾಟಕ ವಿಧಾನ ಪರಿಷತ್ತು

| | | |
|---|---|---|
| ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ | : | 51 |
| ಸದಸ್ಯರ ಹೆಸರು | : | ಶ್ರೀ ಎಂ.ಎ.ಗೋಪಾಲಸ್ವಾಮಿ (ಸ್ಥಳೀಯ ಸಂಸ್ಥೆಗಳ ಕ್ಷೇತ್ರ) |
| ಉತ್ತರಿಸಬೇಕಾದ ದಿನಾಂಕ | : | 13.12.2021 |
| ಉತ್ತರಿಸುವ ಸಚಿವರು | : | ಮಾನ್ಯ ಇಂಧನ ಹಾಗೂ ಕನ್ನಡ ಮತ್ತು ಸಂಸ್ಕೃತಿ ಸಚಿವರು |

*****

| ಪ್ರಶ್ನೆ | | ಉತ್ತರ |
|---|---|---|
| ಅ) | ನಿರಂತರ ಜ್ಯೋತಿ ಯೋಜನೆಯಡಿ ಹಾಸನ ಜಿಲ್ಲೆಯ ಎಲ್ಲಾ ಗ್ರಾಮಗಳಿಗೂ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆಯೇ ; ಇಲ್ಲದಿದ್ದಲ್ಲಿ, ಯಾವ ಯಾವ ಗ್ರಾಮಗಳಿಗೆ ಈ ಯೋಜನೆಯಡಿ ವಿದ್ಯುತ್ ಸರಬರಾಜು ವ್ಯವಸ್ಥೆಯನ್ನು ಇನ್ನೂ ಕಲ್ಪಿಸಿರುವುದಿಲ್ಲ ; ಕಲ್ಪಿಸದಿರಲು ಕಾರಣವೇನು ; | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯ್ಮಮಿತ ವ್ಯಾಪ್ತಿಯ ಹಾಸನ ಜಿಲ್ಲೆ ಅರಸೀಕೆರೆ ತಾಲ್ಲೂಕಿನ 24 ಗ್ರಾಮಗಳು, ಚನ್ನರಾಯಪಟ್ಟಣ ತಾಲ್ಲೂಕಿನ 17 ಗ್ರಾಮಗಳು ಮತ್ತು ಹೊಳೆನರಸೀಪುರ ತಾಲ್ಲೂಕಿನ 3 ಗ್ರಾಮಗಳನ್ನು ಹೊರತುಪಡಿಸಿ ಹಾಸನ ಜಿಲ್ಲೆಯಲ್ಲಿ ಉಳಿದ ಎಲ್ಲಾ ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ಹಾಸನ ಜಿಲ್ಲೆಯ ವ್ಯಾಪ್ತಿಯಲ್ಲಿ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ವ್ಯವಸ್ಥೆ ಕಲ್ಪಿಸಲು ಸಾಧ್ಯವಾಗದ ಗ್ರಾಮಗಳ ವಿವರಗಳನ್ನು **ಅನುಬಂಧ**ದಲ್ಲಿ ಒದಗಿಸಲಾಗಿದೆ.<br><br>ಅರಸೀಕೆರೆ ತಾಲ್ಲೂಕಿನಲ್ಲಿ 8 ನಿರಂತರ ಜ್ಯೋತಿ ಮಾರ್ಗಗಳನ್ನು ಡಿಡಿಯುಜಿಜೆವೈ ಯೋಜನೆಯಡಿ ನಿರ್ಮಿಸಲಾಗಿದ್ದು, ಡಿಡಿಯುಜಿಜೆವೈ ಯೋಜನೆಯ ಕಾರ್ಯಪ್ರೇಷಣೆ ಮೊತ್ತವು ಸಂಪೂರ್ಣವಾಗಿ ಬಳಕೆಯಾದ್ದರಿಂದ, 24 ಗ್ರಾಮಗಳ ಎಲ್‌ಟಿ ಮಾರ್ಗಗಳ ಬೇರ್ಪಡಿಸುವಿಕೆ ಪ್ರಕ್ರಿಯೆಯನ್ನು ಸದರಿ ಯೋಜನೆಯಡಿ ಪೂರ್ಣಗೊಳಿಸಲು ಸಾಧ್ಯವಾಗಿರುವುದಿಲ್ಲ. ಅರಸೀಕೆರೆ ತಾಲ್ಲೂಕಿನ 24 ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ಸರಬರಾಜು ಮಾಡುವ ಸಲುವಾಗಿ ಯೋಜನಾ ವರದಿಯನ್ನು ತಯಾರಿಸಲಾಗಿದೆ. |
| ಆ) | ಸದರಿ ಗ್ರಾಮಗಳಿಗೆ ಯಾವ ಕಾಲಮಿತಿಯೊಳಗೆ ವಿದ್ಯುತ್ ಸರಬರಾಜು ಮಾಡಲಾಗುವುದು ; (ಮಾಹಿತಿ ನೀಡುವುದು) | ಚನ್ನರಾಯಪಟ್ಟಣ ತಾಲ್ಲೂಕಿನ 66/11 ಕೆ.ವಿ. ಶೆಟ್ಟಿಹಳ್ಳಿ ವಿದ್ಯುತ್ ಉಪಕೇಂದ್ರದಿಂದ 11 ಕೆ.ವಿ. ಮಾರ್ಗ ರಚಿಸಿ ಚನ್ನರಾಯಪಟ್ಟಣ ತಾಲ್ಲೂಕಿನ 17 ಗ್ರಾಮಗಳಿಗೆ ನಿರಂತರ ಜ್ಯೋತಿ ವಿದ್ಯುತ್ ಸಂಪರ್ಕ ಕಲ್ಪಿಸುವ ಕಾಮಗಾರಿಗಳ ಯೋಜನಾ ವರದಿಯನ್ನು ತಯಾರಿಸಲಾಗಿದೆ.<br><br>ಹೊಳೆನರಸೀಪುರ ತಾಲ್ಲೂಕಿನಲ್ಲಿ ನಿರಂತರ ಜ್ಯೋತಿ ಕಾಮಗಾರಿಗಳನ್ನು ಪೂರ್ಣಗೊಳಿಸಲು ರೈಲ್ವೇ ಕ್ರಾಸಿಂಗ್ ಕಾಮಗಾರಿ ಬಾಕಿಯಿರುವುದರಿಂದ ಕಟ್ಟಬೆಳಗುಲಿ, ಕೆ.ಬಿ.ಪಾಳ್ಯ ಮತ್ತು ಹಿರೇಬೆಳಗುಲಿ ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಢಿ ವಿದ್ಯುತ್ ಸರಬರಾಜು ಕಲ್ಪಿಸಲಾಗಿರುವುದಿಲ್ಲ. ರೈಲ್ವೇ ಕ್ರಾಸಿಂಗ್ ಪ್ರದೇಶದಲ್ಲಿ ಭೂಗತ ಕೇಬಲ್ ಅಳವಡಿಸಲು ಅಂದಾಜು ಪಟ್ಟಿ ತಯಾರಿಸಲಾಗಿದ್ದು, ರೈಲ್ವೇ ಇಲಾಖೆಯ ಅನುಮೋದನೆಗಾಗಿ ಸಲ್ಲಿಸಬೇಕಾಗಿರುತ್ತದೆ.<br><br>ಅರಸೀಕೆರೆ, ಹೊಳೆನರಸೀಪುರ ಮತ್ತು ಚನ್ನರಾಯಪಟ್ಟಣ ತಾಲ್ಲೂಕುಗಳಲ್ಲಿ ಸದರಿ ಕಾಮಗಾರಿಗಳನ್ನು ಆರ್.ಡಿ.ಎಸ್.ಎಸ್. ಯೋಜನೆಯಡಿ ಪರಿಗಣಿಸಲು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮದ ವತಿಯಿಂದ ಕ್ರಮ ಕೈಗೊಳ್ಳಲಾಗುವುದು. |

| | | |
|---|---|---|
| ಇ) | ನಿರಂತರ ಜ್ಯೋತಿ ಯೋಜನೆ ಜಾರಿ ಬಂದು ಹಲವಾರು ವರ್ಷಗಳ ಕಳೆದಿದ್ದರೂ ಸಹ ಚನ್ನರಾಯಪಟ್ಟಣ ತಾಲ್ಲೂಕಿನ ಶ್ರವಣೇರಿ ಮತ್ತು ಇತರೆ 18 ಗ್ರಾಮಗಳಿಗೆ ಈ ಯೋಜನೆಯಡಿ ಇನ್ನೂ ವಿದ್ಯುತ್ ಸರಬರಾಜು ವ್ಯವಸ್ಥೆ ಕಲ್ಪಿಸದಿರುವುದು ಸರ್ಕಾರದ ಗಮನಕ್ಕೆ ಬಂದಿದೆಯೇ; ಬಂದಿದ್ದಲ್ಲಿ, ಯಾವ ಕಾಲಮಿತಿಯಲ್ಲಿ ಈ ಗ್ರಾಮಗಳಿಗೆ ವಿದ್ಯುತ್ ಸರಬರಾಜು ಮಾಡಲಾಗುವುದು ? (ಮಾಹಿತಿ ನೀಡುವುದು) | ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮ ನಿಯಮಿತ ವ್ಯಾಪ್ತಿಯ ಶ್ರವಣಬೆಳಗೊಳ ವಿಧಾನ ಸಭಾ ಕ್ಷೇತ್ರದ ಚನ್ನರಾಯಪಟ್ಟಣ ತಾಲ್ಲೂಕಿನಲ್ಲಿ ನಿರಂತರ ಜ್ಯೋತಿ ಯೋಜನೆಯಡಿ (ಹಂತ-2) 40 ಫೀಡರ್‌ಗಳು ಚಾಲನೆಗೊಂಡಿದ್ದು, 459 ಗ್ರಾಮಗಳಿಗೆ ನಿರಂತರ ಜ್ಯೋತಿ ವಿದ್ಯುತ್ತನ್ನು ಒದಗಿಸಲಾಗುತ್ತಿದೆ. ಇದಲ್ಲದೆ ಡಿ.ಡಿ.ಯು.ಜಿ.ಜೆ.ವೈ. ಯೋಜನೆಯಡಿ 1 ಫೀಡರ್ ಮುಖೇನ 5 ಗ್ರಾಮಗಳಿಗೆ ನಿರಂತರ ಜ್ಯೋತಿ ವಿದ್ಯುತ್ತನ್ನು ಒದಗಿಸಲಾಗುತ್ತಿದೆ.<br><br>ಚನ್ನರಾಯಪಟ್ಟಣ ತಾಲ್ಲೂಕಿನ ಶ್ರವಣೇರಿ ಮತ್ತು ಇತರೆ 16 ಗ್ರಾಮಗಳಿಗೆ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ವ್ಯವಸ್ಥೆ ಕಲ್ಪಿಸಲು ಸಾಧ್ಯವಾಗಿರುವುದಿಲ್ಲ.<br><br>ಪ್ರಸ್ತುತ, ಜೋಗಿಪುರ ಮತ್ತು ಶ್ರವಣೇರಿ 11 ಕೆ.ವಿ. ಮಾರ್ಗದಿಂದ ವಿದ್ಯುತ್ ಸರಬರಾಜು ಮಾಡುವ ಗ್ರಾಮಗಳಿಗೆ ಹಗಲಿನ ವೇಳೆಯಲ್ಲಿ 7 ಗಂಟೆಗಳ ಕಾಲ 3 ಫೇಸ್ ಮತ್ತು ದಿನವಹಿ 12 ಗಂಟೆಗಳ ಕಾಲ ಸಿಂಗಲ್ ಫೇಸ್ ಒಟ್ಟು 19 ಗಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ. ಗೌಡಗೆರೆ 11 ಕೆ.ವಿ. ಮಾರ್ಗದಿಂದ ವಿದ್ಯುತ್ ಸರಬರಾಜು ಮಾಡುವ ಗ್ರಾಮಗಳಿಗೆ ದಿನವಹಿ 7 ಗಂಟೆಗಳ ಕಾಲ 3 ಫೇಸ್ ಮತ್ತು ದಿನವಹಿ 9 ಗಂಟೆಗಳ ಕಾಲ ಸಿಂಗಲ್ ಫೇಸ್ ಒಟ್ಟು 16 ಗಂಟೆಗಳ ಕಾಲ ವಿದ್ಯುತ್ ಸರಬರಾಜು ಮಾಡಲಾಗುತ್ತಿದೆ.<br><br>ಚನ್ನರಾಯಪಟ್ಟಣ ತಾಲ್ಲೂಕಿನ 66/11 ಕೆ.ವಿ. ಶೆಟ್ಟಿಹಳ್ಳಿ ವಿದ್ಯುತ್ ಉಪಕೇಂದ್ರದಿಂದ 11 ಕೆ.ವಿ. ಮಾರ್ಗ ರಚಿಸಿ ಚನ್ನರಾಯಪಟ್ಟಣ ತಾಲ್ಲೂಕಿನ ಉಳಿದ 17 ಗ್ರಾಮಗಳಿಗೆ ನಿರಂತರ ಜ್ಯೋತಿ ವಿದ್ಯುತ್ ಸಂಪರ್ಕ ಕಲ್ಪಿಸುವ ಕಾಮಗಾರಿಗಳ ಯೋಜನಾ ವರದಿಯನ್ನು ತಯಾರಿಸಲಾಗಿದೆ.<br><br>ಸದರಿ ಕಾಮಗಾರಿಗಳನ್ನು ಆರ್.ಡಿ.ಎಸ್.ಎಸ್. ಯೋಜನೆಯಡಿ ಪರಿಗಣಿಸಲು ಚಾಮುಂಡೇಶ್ವರಿ ವಿದ್ಯುತ್ ಸರಬರಾಜು ನಿಗಮದ ವತಿಯಿಂದ ಕ್ರಮ ಕೈಗೊಳ್ಳಲಾಗುವುದು. |

ಸಂಖ್ಯೆ: ಎನರ್ಜಿ 265 ಇಬಿಎಸ್ 2021

(ವಿ ಸುನಿಲ್ ಕುಮಾರ್)
ಇಂಧನ ಹಾಗೂ ಕನ್ನಡ ಮತ್ತು
ಸಂಸ್ಕೃತಿ ಸಚಿವರು

**ಮಾನ್ಯ ವಿಧಾನ ಪರಿಷತ್ತಿನ ಸದಸ್ಯರಾದ ಶ್ರೀ ಎಂ.ಎ. ಗೋಪಾಲಸ್ವಾಮಿ ರವರ ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ 51ಕ್ಕೆ ಅನುಬಂಧ**

**ಹಾಸನ ಜಿಲ್ಲೆಯ ವ್ಯಾಪ್ತಿಯಲ್ಲಿ ನಿರಂತರ ಜ್ಯೋತಿ ಯೋಜನೆಯಡಿ ವಿದ್ಯುತ್ ವ್ಯವಸ್ಥೆ ಕಲ್ಪಿಸಲು ಸಾಧ್ಯವಾಗದ ಗ್ರಾಮಗಳ ವಿವರಗಳು :-**

**ಅರಸೀಕೆರೆ ತಾಲ್ಲೂಕು :** ಕುರುಬರಹಳ್ಳಿ, ಕೆಂಗನಹಳ್ಳಿ, ಗುಡ್ಡದಕೆಂಗೇನಹಳ್ಳಿ, ತಿರುಪತಿಹಳ್ಳಿ, ಕೆಳಗಳ ತಿರುಪತಿಹಳ್ಳಿ, ಮೇಗಲ ತಿರುಪತಿಹಳ್ಳಿ, ಕೆಳಗಳ ಕೆಂಗನಹಳ್ಳಿ, ಸಿಂಗೇನಹಳ್ಳಿ, ಚಿಕ್ಕಲಿಂಗನಹಳ್ಳಿ, ಸಿಂಗಟಗೆರೆ, ರೊಪ್ಪ, ಉಂಡಿಗನಾಳು ಬಿ ತಾಂಡ್ಯ, ಉಂಡಿಗನಾಳು ಎ ತಾಂಡ್ಯ, ಬಿ.ಎಲ್.ಕೊಪ್ಪಲು, ಸಂಕ್ಲಾಪುರ, ಬಸವೇಶ್ವರನಗರ, ದೇವಿಹಳ್ಳಿ, ಸಂಕ್ಲಾಪುರ ಕಾಲೋನಿ, ಗುಂಡ್ಯಾನಹಳ್ಳಿ, ಬಸವನಪುರ ತಾಂಡ್ಯ, ಉರಿಗಿಲವಾಡಿ, ಜಿ.ಹೊನ್ನೇನಹಳ್ಳಿ, ಬಿದರೆಕಾವಲ್ ಮತ್ತು ಮಾದಾಪುರ.

**ಚನ್ನರಾಯಪಟ್ಟಣ ತಾಲ್ಲೂಕು :** ಚಾಮಡಿಹಳ್ಳಿ, ಶೆಟ್ಟಿಹಳ್ಳಿ, ಅರಳಾಪುರ, ಜೋಗಿಪುರ, ವಿ. ಸೋಮನಹಳ್ಳಿ, ನಂದಿಪುರ, ಮಲ್ಲವನಘಟ್ಟ, ಬೇಡಿಗನಹಳ್ಳಿ, ಅಂತನಹಳ್ಳಿ, ಹೊಂಬಾಳೆಕೊಪ್ಪಲು, ಎಸ್. ಹೊಸೂರು, ಗೌಡಗೆರೆ, ಶ್ರವಣೇರಿ, ಜತ್ತೇನಹಳ್ಳಿ, ಪ್ಯಾಲಸಮುದ್ರ, ಕೆ. ಕಾಳೇನಹಳ್ಳಿ ಮತ್ತು ಹಡೇನಹಳ್ಳಿ

**ಹೊಳೆನರಸೀಪುರ ತಾಲ್ಲೂಕು :** ಕಟ್ಟಬೆಳಗುಲಿ, ಕೆ.ಬಿ. ಪಾಳ್ಯ ಮತ್ತು ಹಿರೇಬೆಳಗುಲಿ.